# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 679 (774)
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 20-12-2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಪದವಿ ಪೂರ್ವ ಕಾಲೇಜುಗಳಲ್ಲಿ ಮಂಜೂರಾಗಿರುವ ಮತ್ತು ಖಾಲಿ ಇರುವ ಬೋಧಕ ಹುದ್ದೆಗಳ ಸಂಖ್ಯೆ ಎಷ್ಟು; (ವಿಷಯವಾರು ವಿವರಗಳನ್ನು ನೀಡುವುದು) | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ:12857 ಮತ್ತು ಖಾಲಿ ಇರುವ ವಿವಿಧ ವಿಷಯಗಳ ಉಪನ್ಯಾಸಕರ ಹುದ್ದೆಗಳ ಸಂಖ್ಯೆ:3539 (ವಿಷಯವಾರು ಬೋಧಕ ಹುದ್ದೆಗಳ ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ). |
| ಆ) | ಹೊಸದಾಗಿ ಮಂಜೂರಾಗಬೇಕಾಗಿರುವ ಹುದ್ದೆಗಳ ಸಂಖ್ಯೆ ಎಷ್ಟು; (ವಿಷಯವಾರು ವಿವರಗಳನ್ನು ನೀಡುವುದು) | 2019-20 ರಿಂದ 2021-22ನೇ ಶೈಕ್ಷಣಿಕ ಸಾಲಿನಲ್ಲಿ ಒಟ್ಟು 12 ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ಸ್ಥಳಾಂತರಿಸಿ ಆದೇಶಿಸಿದ್ದು, ಈ 12 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಹುದ್ದೆ ಮಂಜೂರಾಗಿರುವುದಿಲ್ಲವಾದ್ದರಿಂದ ಪ್ರತಿ ಕಾಲೇಜಿಗೆ ಈ ಕೆಳಕಂಡ ವಿಷಯಗಳ 07 ಉಪನ್ಯಾಸಕರ ಹುದ್ದೆಗಳಂತೆ ಒಟ್ಟು 84 ಹುದ್ದೆಗಳು ಮಂಜೂರಾಗಬೇಕಾಗಿರುತ್ತದೆ.<br><br>ಕ್ರಮ ಸಂಖ್ಯೆ / ವಿಷಯಗಳು / ಸಂಖ್ಯೆ<br>1. ಭಾಷಾ ವಿಷಯಗಳು — 02<br>2. ಕಲಾ ಸಂಯೋಜನೆ — 04<br>3. ವಾಣಿಜ್ಯ ಸಂಯೋಜನೆ — 01<br>ಪ್ರತೀ ಕಾಲೇಜಿಗೆ ಹುದ್ದೆಗಳು — 07 |
| ಇ) | ಖಾಲಿ ಇರುವ ಮತ್ತು ಹೊಸದಾಗಿ ಮಂಜೂರಾಗಬೇಕಾಗಿರುವ ಹುದ್ದೆಗಳನ್ನು ಯಾವ ಅವಧಿಯಲ್ಲಿ ಭರ್ತಿ ಮಾಡಲಾಗುವುದು; | ಖಾಲಿ ಇರುವ ಮತ್ತು ಹೊಸದಾಗಿ ಮಂಜೂರಾಗಬೇಕಾಗಿರುವ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ನಿರ್ದೇಶಕರಿಂದ ಪ್ರಸ್ತಾವನೆಯನ್ನು ಪಡೆದು ಕ್ರಮ ವಹಿಸಲಾಗುವುದು. |
| ಈ) | ಸದರಿ ಸಾಲಿನಲ್ಲಿ ಎಷ್ಟು ಮಂದಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲಾಗಿದೆ; | ಸರ್ಕಾರದ ಆದೇಶ ಸಂಖ್ಯೆ:ಇಪಿ 61 ಡಿಜಿಡಿ 2021 ದಿನಾಂಕ:26-10-2021ರ ಆದೇಶದನ್ವಯ 3552 ಅತಿಥಿ ಉಪನ್ಯಾಸಕರನ್ನು ನೇಮಕಾತಿ ಮಾಡಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. |
| ಉ) | ಅತಿಥಿ ಉಪನ್ಯಾಸಕರಿಗೆ ಮಾಸಿಕ ನೀಡಲಾಗುತ್ತಿರುವ ಗೌರವಧನವೆಷ್ಟು; | ಅತಿಥಿ ಉಪನ್ಯಾಸಕರಿಗೆ ಮಾಸಿಕ ನೀಡಲಾಗುತ್ತಿರುವ ಗೌರವಧನ ರೂ.9,000/- |

| | | |
|---|---|---|
| ಊ) | ಅತಿಥಿ ಉಪನ್ಯಾಸಕರಿಗೆ ಬೋಧನೆಗೆ ನಿಗದಿಪಡಿಸಿರುವ ಅವಧಿಯೆಷ್ಟು; | ಅತಿಥಿ ಉಪನ್ಯಾಸಕರಿಗೆ ವಾರದಲ್ಲಿ 10 ಗಂಟೆಗಳ ಬೋಧನಾ ಅವಧಿ ನಿಗಧಿಪಡಿಸಲಾಗಿದೆ. |
| ಋ) | ಅತಿಥಿ ಉಪನ್ಯಾಸಕರಿಗೆ ಗೌರವಧನ ಹೆಚ್ಚಿಸಲು ಸರ್ಕಾರ ಚಿಂತಿಸುವುದೇ? | ಅತಿಥಿ ಉಪನ್ಯಾಸಕರುಗಳ ಗೌರವಧನವನ್ನು ರೂ.9,000/- ರಿಂದ ರೂ.12,000/-ಗಳಿಗೆ ಹೆಚ್ಚಿಸುವ ಸಂಬಂಧದ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿತ್ತು. ಆದರೆ, ಆರ್ಥಿಕ ಇಲಾಖೆಯು ಈ ಪ್ರಸ್ತಾವನೆಗೆ ಸಹಮತಿಸಿರುವುದಿಲ್ಲ. |

**ಸಂಖ್ಯೆ: ಇಡಿ 206 ಡಿಜಿಡಬ್ಲ್ಯೂ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು